ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಗುರುವಾರ, ದಿನಾಂಕ : 10 ನೇ ಡಿಸೆಂಬರ್, 2020

ವಿದ್ಯುತ್ ಬೆಲೆ ಏರಿಕೆ ಮಾಡಿರುವ ಕುರಿತು

ಶ್ರೀ ಹೆಚ್. ಎಂ. ರಮೇಶ ಗೌಡ(ವಿಧಾನ ಸಭೆಯಿಂದ ಚುನಾಯಿತರಾದವರು) –

347 (365) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಪ್ರಸಕ್ತ ವರ್ಷ ರಾಜ್ಯದ ಜನತೆ ಕೋವಿಡ್ ಸಂಕಷ್ಟದಿಂದ ಬಳಲುತ್ತಿರುವಾಗಲೇ ವಿದ್ಯುತ್ ಬೆಲೆ ಏರಿಕೆ ಮಾಡಿರುವುದರಿಂದ ಜನರ ಆಕ್ರೋಷಕ್ಕೆ ಕಾರಣವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ವಿದ್ಯುತ್ ದರ ಇಳಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ;

(ಆ) ಬೆಸ್ಕಾಂ, ಎಸ್ಕಾಂ, ವೆಸ್ಕಾಂ, ಜೆಸ್ಕಾಂ, ಹೆಸ್ಕಾಂ, ಮುಂತಾದ ವಿದ್ಯುತ್ ಪೂರೈಕೆಯ ಕಂಪನಿಗಳು ಏಕರೂಪ ದರ ಹೆಚ್ಚಳ ಮಾಡಿವೆಯೇ; (ವಿವರ ನೀಡುವುದು)

(ಇ) ಇಂಧನ ಇಲಾಖೆಯಿಂದ ರಾಜ್ಯದ ಎಷ್ಟು ಪ್ರದೇಶಗಳಲ್ಲಿ ಈಗಾಗಲೇ ಸೋಲಾರ್ ಪ್ಲಾಂಟ್‌ಗಳು ಕಾರ್ಯನಿರ್ವಹಿಸುತ್ತಿವೆ; ಇವುಗಳಲ್ಲಿ ಖಾಸಗಿ ಸಹಭಾಗಿತ್ವದ ಸೋಲಾರ್ ಪ್ಲಾಂಟ್‌ಗಳು ಎಷ್ಟಿವೆ ಮತ್ತು ಎಲ್ಲಿವೆ; (ವಿವರ ನೀಡುವುದು)

(ಈ) ಮುಂದಿನ ದಿನಗಳಲ್ಲಿ ಹೊಸ ಸೋಲಾರ್ ಪ್ಲಾಂಟ್ ನಿರ್ಮಾಣದ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; (ಸಂಪೂರ್ಣ ವಿವರ ನೀಡುವುದು)

(ಉ) ಇಂಧನ ಇಲಾಖೆ ಪರ್ಯಾಯ ಶಕ್ತಿ ಮೂಲಗಳ ಸಂಶೋಧನೆ ಮತ್ತು ಅಭಿವೃದ್ಧಿಗೆ ಪ್ರತ್ಯೇಕ ಅನುದಾನ ಮೀಸಲಿಟ್ಟಿದೆಯೇ; ಮೀಸಲಿಟ್ಟಿದ್ದಲ್ಲಿ, ಎಷ್ಟು ಹಣ ವ್ಯಯವಾಗಿದೆ?